

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 873 |
| ಸದಸ್ಯರ ಹೆಸರು | : | ಡಾ॥ ಜೈಮಾಲ ರಾಮಚಂದ್ರ |
| ಉತ್ತರಿಸುವ ದಿನಾಂಕ | : | 11/03/2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು |

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಕಾರ್ಯ ನಿರ್ವಹಿಸುತ್ತಿರುವ ವಸತಿ ನಿಲಯಗಳ ಸಂಖ್ಯೆ ಎಷ್ಟು; ಈ ವಸತಿ ನಿಲಯಗಳಿಗೆ ಸಮರ್ಥ ಮೇಲ್ವಿಚಾರಕರನ್ನು ನೇಮಿಸಲಾಗಿದೆಯೇ; ಇವರ ಸಂಖ್ಯೆ ಎಷ್ಟು ಈ ಸಂಖ್ಯೆಯು ವಿದ್ಯಾರ್ಥಿಗಳಿಗೆ ಅನುಗುಣವಾಗಿದೆಯೇ; ವಸತಿ ನಿಲಯಗಳಲ್ಲಿ ಕಂಪ್ಯೂಟರ್ ಇಂಟರ್‌ನೆಟ್ ವ್ಯವಸ್ಥೆ ಇದೆಯೇ;</td><td>ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಸುತ್ತಿರುವ ವಿದ್ಯಾರ್ಥಿ ನಿಲಯಗಳ ವಿವರ ಈ ಕೆಳಕಂಡಂತಿದೆ.<br><br>
<table>
<tr><th>ಕ್ರ. ಸಂ</th><th>ವಿವರ</th><th>ಪರಿಶಿಷ್ಟ ಜಾತಿ</th><th>ಪರಿಶಿಷ್ಟ ಪಂಗಡ</th></tr>
<tr><td>1</td><td>ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು</td><td>1233</td><td>136</td></tr>
<tr><td>2</td><td>ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು</td><td>634</td><td>119</td></tr>
<tr><td></td><td>ಒಟ್ಟು</td><td>1867</td><td>255</td></tr>
</table>
<br>ಈ ವಿದ್ಯಾರ್ಥಿ ನಿಲಯಗಳಿಗೆ ಪದವಿ ಹಾಗೂ ಬಿ.ಇಡಿ. ವಿದ್ಯಾರ್ಹತೆ ಹೊಂದಿರುವ ಒಟ್ಟು 1320 ಸಮರ್ಥ ಸೀನಿಯರ್ ವಾರ್ಡನ್ ಹಾಗೂ ವಾರ್ಡನ್‌ಗಳನ್ನು ನೇಮಿಸಲಾಗಿರುತ್ತದೆ. ಖಾಲಿ ಇರುವ ವಾರ್ಡನ್ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ವಹಿಸಲಾಗುತ್ತಿದೆ.<br><br>ಇಲಾಖೆಯಿಂದ ನಿರ್ವಹಿಸಲಾಗುತ್ತಿರುವ ಎಲ್ಲಾ ವಿದ್ಯಾರ್ಥಿ ನಿಲಯಗಳಲ್ಲಿಯೂ ಬಯೋಮೆಟ್ರಿಕ್ ನಿರ್ವಹಣೆ ಮಾಡಲಾಗುತ್ತಿದ್ದು, ಕಂಪ್ಯೂಟರ್ ಇಂಟರ್‌ನೆಟ್ ವ್ಯವಸ್ಥೆ ಕಲ್ಪಿಸಲಾಗಿದೆ.</td></tr>
<tr><td>ಆ)</td><td>ವಸತಿ ನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಅನುಗುಣವಾಗಿ ಸೌಲಭ್ಯಗಳು ಇದೆಯೇ; ಯಾವ ಯಾವ ಸೌಲಭ್ಯಗಳನ್ನು ಪ್ರಸ್ತುತ ವಸತಿ ನಿಲಯಗಳಲ್ಲಿ ನೀಡಲಾಗುತ್ತಿದೆ;</td><td>ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿನ ನಿಯಾರ್ಥಿಗಳಿಗೆ ವಿವಿಧ ರೀತಿಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿದೆ. ಪ್ರಸ್ತುತ ವಸತಿ ನಿಲಯಗಳಲ್ಲಿ ನೀಡಲಾಗುತ್ತಿರುವ ಸೌಲಭ್ಯಗಳ ವಿವರವನ್ನು ಅನುಬಂಧ-1 ರಲ್ಲಿ ನೀಡಲಾಗಿದೆ.</td></tr>
</table>

| | | |
|---|---|---|
| ಇ) | ವಸತಿ ನಿಲಯಗಳಲ್ಲಿ ಶುಚಿತ್ವವನ್ನು ಕಾಪಾಡಲು ಯಾವ ಯಾವ ರೀತಿಯ ಕ್ರಮ ಹಾಗೂ ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿದೆ; | ವಸತಿ ನಿಲಯಗಳಲ್ಲಿ ಶುಚಿತ್ವ ಕಾಪಾಡಲು ವಿದ್ಯಾರ್ಥಿನಿಲಯದ ಆವರಣ, ಶೌಚಾಲಯ, ಸ್ನಾನದ ಗೃಹಗಳು, ವಾಸದ ಕೊಠಡಿ ಹಾಗೂ ಅಡುಗೆ ಕೋಣೆಗಳನ್ನು ಸ್ವಚ್ಛವಾಗಿಟ್ಟುಕೊಳ್ಳಲಾಗುತ್ತಿದ್ದು, ಸದರಿ ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಶುದ್ಧ ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಈ ಸಂಬಂಧ ದಿನಾಂಕ:04.12.2019 ರ ಸುತ್ತೋಲೆಯಲ್ಲಿ ವಿದ್ಯಾರ್ಥಿನಿಲಯಗಳ ಕೊಠಡಿಗಳನ್ನು ಶುಚಿತ್ವವಾಗಿಟ್ಟುಕೊಳ್ಳುವಂತೆ ಹಾಗೂ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ಗಾಳಿ ಬೆಳಕಿನ ವ್ಯವಸ್ಥೆ ಹಾಗೂ ವಿದ್ಯಾರ್ಥಿಗಳಿಗೆ ಪೂರಕವಾದ ವಾತಾವರಣವನ್ನು ಕಲ್ಪಿಸುವಂತೆ ಎಲ್ಲಾ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.<br><br>ಸರ್ಕಾರದ ಆದೇಶ ಸಂಖ್ಯೆ:ಸಕಇ 54 ಪಕವಿ 2020(ಭಾಗ), ದಿನಾಂಕ:07-02-2020ರಲ್ಲಿ ವಾಟರ್ ಪ್ಯೂರಿಫೈಯರ್ ಇಲ್ಲದೇ ಇರುವ 198 ವಿದ್ಯಾರ್ಥಿನಿಲಯಗಳಿಗೆ ರೂ.2.98 ಕೋಟಿಗಳ ವೆಚ್ಚದಲ್ಲಿ ಕೆಟಿಪಿಪಿ ನಿಯಮಾನುಸಾರ ಜಿಲ್ಲಾಮಟ್ಟದಲ್ಲಿ ಖರೀದಿಸಲು ಕ್ರಮವಹಿಸುವಂತೆ ಆದೇಶಿಸಿದೆ. |
| ಈ) | ಈ ವಸತಿ ನಿಲಯಗಳನ್ನು ವಿದ್ಯಾರ್ಥಿಗಳ ಆರೋಗ್ಯದ ದೃಷ್ಟಿಯಿಂದ ಮೇಲ್ದರ್ಜೆಗೆ ಏರಿಸಲು ಸರ್ಕಾರದ ಕ್ರಮವೇನ? | ವಸತಿ ನಿಲಯಗಳಲ್ಲಿನ ನಿಲಯಾರ್ಥಿಗಳ ಆರೋಗ್ಯದ ಹಿತದೃಷ್ಟಿಯಿಂದ ಈ ಕೆಳಕಂಡಂತೆ ಕ್ರಮಕೈಗೊಳ್ಳಲಾಗಿದೆ.<br>• ಮಾಹೆಯಾನ ರೂ.73.00ರ ವೆಚ್ಚದಲ್ಲಿ ಬಾಲಕರಿಗೆ ಮೈಸೂರು ಸ್ಯಾಂಡಲ್ ಸೋಪ್, ಮೈಸೂರು ಡಿಟರ್ಜೆಂಟ್ ಕೇಕ್, ಕೊಬ್ಬರಿ ಎಣ್ಣೆ, ಟೂತ್ ಪೇಸ್ಟ್ ಮತ್ತು ಟೂತ್ ಬ್ರಷ್ ನೀಡಲಾಗುತ್ತಿದೆ.<br>• ಮಾಹೆಯಾನ ರೂ.105.00ರ ವೆಚ್ಚದಲ್ಲಿ ಬಾಲಕಿಯರಿಗೆ ಈ ಮೇಲಿನ ಸಾಮಾಗ್ರಿಗಳ ಜೊತೆಗೆ ಹೆಚ್ಚುವರಿಯಾಗಿ ಟಾಲ್ಕಂ ಪೌಡರ್‌ನ್ನು ನೀಡಲಾಗುವುದು.<br>• ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗೆ ಆರೋಗ್ಯ ಇಲಾಖೆಯಿಂದ ಉಚಿತವಾಗಿ ಸ್ಯಾನಿಟರಿ ನ್ಯಾಪ್ಕಿನ್‌ಗಳನ್ನು ಉಚಿತವಾಗಿ ಒದಗಿಸಲಾಗುತ್ತಿದೆ.<br>• 100 ಸಂಖ್ಯಾಬಲದ ಪ್ರತಿ ನಿಲಯಕ್ಕೆ ವಾರ್ಷಿಕ ರೂ.5000.00 ರ ವೆಚ್ಚದಲ್ಲಿ ಹಾಗೂ 100 ವಿದ್ಯಾರ್ಥಿಗಳ ಸಂಖ್ಯೆ ಮೀರಿದ ಪ್ರತಿ ನಿಲಯಕ್ಕೆ ವಾರ್ಷಿಕ ರೂ.8000.00ಗಳ ವೆಚ್ಚದಲ್ಲಿ ವೈದ್ಯಕೀಯ ಸೌಲಭ್ಯ ಒದಗಿಸಲಾಗಿದೆ. |

| | | |
|---|---|---|
| | | • ವಾರ್ಷಿಕ ರೂ.150.00 ರ ವೆಚ್ಚದಲ್ಲಿ ಬಾಲಕರಿಗೆ ತಲೆ ಕ್ಷೌರದ ವೆಚ್ಚ ನೀಡಲಾಗುತ್ತಿದೆ.<br>• ಪ್ರತಿ ನಿಲಯಕ್ಕೆ ಎರಡು ವರ್ಷಕ್ಕೊಮ್ಮೆ ರೂ.20,000.00ಗಳ ಮಿತಿಯೊಳಗೆ ಕ್ರೀಡಾ ಸಾಮಾಗ್ರಿಗಳನ್ನು ಒದಗಿಸಲಾಗುವುದು.<br>• ನಿಲಯದಲ್ಲಿ ದಾಖಲಾಗುವ ಎಲ್ಲಾ ನಿಲಯಾರ್ಥಿಗಳಿಗೆ ಜಿಲ್ಲಾ/ತಾಲ್ಲೂಕು ವೈದ್ಯಾಧಿಕಾರಿಗಳಿಂದ ಪ್ರತಿ ಮೂರು ತಿಂಗಳಿಗೊಮ್ಮೆ ಕಡ್ಡಾಯವಾಗಿ ಆರೋಗ್ಯ ತಪಾಸಣೆ ಮಾಡಿಸಲಾಗುತ್ತದೆ. |

ಸಕಇ 165 ಪಕವಿ 2020

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:873 ಕ್ಕೆ ಅನುಬಂಧ-1

### ಸಮಾಜ ಕಲ್ಯಾಣ ಇಲಾಖಾವತಿಯಿಂದ ನಡೆಸುತ್ತಿರುವ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ನೀಡಲಾಗುತ್ತಿರುವ ವಿವಿಧ ಸವಲತ್ತುಗಳ ವಿವರ.

| ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು | ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು |
|---|---|
| • ಮಾಹೆಯಾನ ರೂ.1400.00/- ರ ವೆಚ್ಚದಲ್ಲಿ ಭೋಜನ.<br>• ಮಾಹೆಯಾನ ರೂ.73.00ರ ವೆಚ್ಚದಲ್ಲಿ ಬಾಲಕರಿಗೆ ಮೈಸೂರು ಸ್ಯಾಂಡಲ್ ಸೋಪ್, ಮೈಸೂರು ಡಿಟರ್ಜೆಂಟ್ ಕೇಕ್, ಕೊಬ್ಬರಿ ಎಣ್ಣೆ, ಟೂತ್ ಪೇಸ್ಟ್ ಮತ್ತು ಟೂತ್ ಬ್ರಷ್.<br>• ಮಾಹೆಯಾನ ರೂ.105.00ರ ವೆಚ್ಚದಲ್ಲಿ ಬಾಲಕಿಯರಿಗೆ ಈ ಮೇಲಿನ ಸಾಮಾಗ್ರಿಗಳ ಜೊತೆಗೆ ಹೆಚ್ಚುವರಿಯಾಗಿ ಟಾಲ್ಕಂ ಪೌಡರ್‌ನ್ನು ನೀಡಲಾಗುವುದು.<br>• ವಾರ್ಷಿಕ ರೂ.550.00 ರಿಂದ 1060.00ರ ದರದಲ್ಲಿ 02 ಜೊತೆ ಸಮವಸ್ತ್ರಗಳು.<br>• ವಾರ್ಷಿಕ ರೂ.300.00ರ ವೆಚ್ಚದಲ್ಲಿ 01 ಜೊತೆ ಶೂ ಮತ್ತು ಸಾಕ್ಸ್.<br>• ವಾರ್ಷಿಕ ರೂ.400.00ರ ವೆಚ್ಚದಲ್ಲಿ ಪಠ್ಯ ಪುಸ್ತಕ ಮತ್ತು ಲೇಖನ ಸಾಮಾಗ್ರಿ.<br>• ವಾರ್ಷಿಕ ರೂ.150.00 ರ ವೆಚ್ಚದಲ್ಲಿ ಬಾಲಕರಿಗೆ ಕ್ಷೌರದ ವೆಚ್ಚ.<br>• ಮೂರು ವರ್ಷಕ್ಕೊಮ್ಮೆ ರೂ.800.00ಗಳ ದರದಲ್ಲಿ ಹಾಸಿಗೆ, ಹೊದಿಕೆಗಳ ಪೂರೈಕೆ<br>• ಪ್ರತಿ ನಿಲಯಕ್ಕೆ ವಾರ್ಷಿಕ ರೂ.3000.00 ವೆಚ್ಚದಲ್ಲಿ ದಿನ ಪತ್ರಿಕೆ/ವಾರ/ಮಾಸ ಪತ್ರಿಕೆಗಳ ವೆಚ್ಚ.<br>• 100 ವಿದ್ಯಾರ್ಥಿಗಳ ಸಂಖ್ಯೆಯ ಪ್ರತಿ ನಿಲಯಕ್ಕೆ ವಾರ್ಷಿಕ ರೂ.5000.00 ರ ವೆಚ್ಚದಲ್ಲಿ ಹಾಗೂ 100 ವಿದ್ಯಾರ್ಥಿಗಳ ಸಂಖ್ಯೆ ಮೀರಿದ ಪ್ರತಿ ನಿಲಯಕ್ಕೆ ವಾರ್ಷಿಕ ರೂ.8000.00ಗಳ ವೆಚ್ಚದಲ್ಲಿ ವೈದ್ಯಕೀಯ ಸೌಲಭ್ಯ.<br>• ವರ್ಷದಲ್ಲಿ 6 ತಿಂಗಳು ವಿಜ್ಞಾನ, ಗಣಿತ, ಇಂಗ್ಲೀಷ್ ಮತ್ತು ಇತರೆ ಸಾಮಾನ್ಯ ವಿಷಯಗಳಲ್ಲಿ 03 ಅರೆ ಕಾಲಿಕ ಬೋಧಕರಿಂದ ವಿಶೇಷ ಬೋಧನೆ.(ವಾರ್ಷಿಕ ವೆಚ್ಚ ರೂ.18,000/-<br>• ಪ್ರತಿ ನಿಲಯಕ್ಕೆ ಎರಡು ವರ್ಷಕ್ಕೊಮ್ಮೆ ರೂ.20,000.00ಗಳ ಮಿತಿಯೊಳಗೆ ಕ್ರೀಡಾ ಸಾಮಾಗ್ರಿಗಳನ್ನು ಒದಗಿಸಲಾಗುವುದು.<br>• ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗೆ ಮಾಹೆಯಾನ ರೂ.25.00ಗಳ ವೆಚ್ಚದಲ್ಲಿ ಸ್ಯಾನಿಟರಿ ನ್ಯಾಪ್ಕಿನ್‌ಗಳನ್ನು ಉಚಿತವಾಗಿ ಒದಗಿಸಲಾಗುತ್ತಿದೆ ಪ್ರಸ್ತುತ ಆರೋಗ್ಯ ಇಲಾಖೆಯಿಂದ ಉಚಿತವಾಗಿ ಒದಗಿಸಲಾಗುತ್ತಿದೆ. | • ಮಾಹೆಯಾನ ರೂ.1500.00/-ರ ವೆಚ್ಚದಲ್ಲಿ ಭೋಜನ.<br>• ಮೂರು ವರ್ಷಕ್ಕೊಮ್ಮೆ ರೂ.1000.00ಗಳ ದರದಲ್ಲಿ ಹಾಸಿಗೆ, ಹೊದಿಕೆಗಳ ಪೂರೈಕೆ<br>• ಪ್ರತಿ ನಿಲಯಕ್ಕೆ ವಾರ್ಷಿಕ ರೂ.3500.00 ವೆಚ್ಚದಲ್ಲಿ ದಿನ ಪತ್ರಿಕೆ/ವಾರ/ಮಾಸ ಪತ್ರಿಕೆಗಳ ವೆಚ್ಚ.<br>• ಮಾಹೆಯಾನ ರೂ.73.00ಗಳ ದರದಲ್ಲಿ ಬಾಲಕರಿಗೆ ಮೈಸೂರು ಸ್ಯಾಂಡಲ್ ಸೋಪ್, ಮೈಸೂರು ಡಿಟರ್ಜೆಂಟ್ ಕೇಕ್, ಕೊಬ್ಬರಿ ಎಣ್ಣೆ, ಟೂತ್ ಪೇಸ್ಟ್ ಮತ್ತು ಟೂತ್ ಬ್ರಷ್.<br>• ಮಾಹೆಯಾನ ರೂ.105.00ರ ವೆಚ್ಚದಲ್ಲಿ ಬಾಲಕಿಯರಿಗೆ ಈ ಮೇಲಿನ ಸಾಮಾಗ್ರಿಗಳ ಜೊತೆಗೆ ಹೆಚ್ಚುವರಿಯಾಗಿ ಟಾಲ್ಕಂ ಪೌಡರ್‌ನ್ನು ನೀಡಲಾಗುವುದು.<br>• ಪ್ರತಿ ನಿಲಯಕ್ಕೆ ಎರಡು ವರ್ಷಕ್ಕೊಮ್ಮೆ ರೂ.20,000.00ಗಳ ಮಿತಿಯೊಳಗೆ ಕ್ರೀಡಾ ಸಾಮಾಗ್ರಿಗಳನ್ನು ಒದಗಿಸಲಾಗುವುದು<br>• ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗೆ ಮಾಹೆಯಾನ ರೂ.25.00 ರ ವೆಚ್ಚದಲ್ಲಿ ಸ್ಯಾನಿಟರಿ ನ್ಯಾಪ್ಕಿನ್‌ಗಳನ್ನು ಉಚಿತವಾಗಿ ಒದಗಿಸಲಾಗುತ್ತಿದೆ. ಪ್ರಸ್ತುತ ಆರೋಗ್ಯ ಇಲಾಖೆಯಿಂದ ಉಚಿತವಾಗಿ ಒದಗಿಸಲಾಗುತ್ತಿದೆ. |